KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ನವೆಂಬರ್ ೪, ೨೦೧೦ (ಕಾರ್ತೀಕ ೧೩, ಶಕ ವರ್ಷ ೧೯೩೨) | ಸಂಚಿಕೆ ೪೩ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಶಿಕ್ಷಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಇಡಿ 61 ಎಸ್‌ಎಂಸಿ 2009, ಬೆಂಗಳೂರು, ದಿನಾಂಕ:3ನೇ ಸೆಪ್ಟೆಂಬರ್, 2010**

ಕರ್ನಾಟಕ ರಾಜ್ಯದಲ್ಲಿ ಭಾಷಾ ಅಲ್ಪ ಸಂಖ್ಯಾತರುಗಳು ನಡೆಸುತ್ತಿರುವ ಶಿಕ್ಷಣ ಸಂಸ್ಥೆಗಳನ್ನು ಭಾಷಾ ಅಲ್ಪ ಸಂಖ್ಯಾತ ಶಿಕ್ಷಣ ಸಂಸ್ಥೆಗಳೆಂದು ಘೋಷಿಸುವ ಮುನ್ನ ಮೀಸಲಾತಿ ನಿಯಮಗಳನ್ನು ಪಾಲಿಸುವ ಬಗ್ಗೆ ಜಿಜ್ಞಾಸೆ ಉಂಟಾದ ಕಾರಣದಿಂದಾಗಿ ಈ ವಿಷಯವನ್ನು ದಿನಾಂಕ:18.04.2005 ರಂದು ನಡೆದ ಸಚಿವ ಸಂಪುಟದ ಉಪ ಸಮಿತಿಯ ಮುಂದೆ ತರಲಾಗಿದ್ದು, ಭಾಷಾ ಅಲ್ಪಸಂಖ್ಯಾತರ (Linguistic Minority Institutions) ಅನುದಾನಿತ ಶಾಲೆಗಳಲ್ಲಿ ಮೀಸಲಾತಿ ನಿಯಮವನ್ನು ಅಳವಡಿಸತಕ್ಕದ್ದೆಂದು ನಿರ್ಣಯಿಸಿರುವ ಹಿನ್ನೆಲೆಯಲ್ಲಿ ಭಾಷಾ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳು ಕಡ್ಡಾಯವಾಗಿ ಮೀಸಲಾತಿ ನಿಯಮಗಳನ್ನು ಪಾಲಿಸತಕ್ಕದ್ದೆಂದು ಸರ್ಕಾರವು ತೀರ್ಮಾನಿಸಿದೆ.

ಕರ್ನಾಟಕ ರಾಜ್ಯದಲ್ಲಿನ ಮತೀಯ ಅಲ್ಪಸಂಖ್ಯಾತ ಸಂಸ್ಥೆಗಳನ್ನು ಘೋಷಿಸುವ ರೀತಿಯಲ್ಲಿಯೇ ಭಾಷಾ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳೆಂದು ಘೋಷಿಸುವ ಪ್ರಸ್ತಾವನೆಗಳನ್ನು ಸಂಬಂಧಿಸಿದ ಆಯಾಯ ಆಯುಕ್ತಾಲಯದ ಮಟ್ಟದಲ್ಲಿಯೇ ಪರಿಶೀಲಿಸಿ ಅಗತ್ಯ ಕ್ರಮ ಕೈಗೊಳ್ಳುವ ನಿಟ್ಟಿನಲ್ಲಿ ಕೆಳಕಂಡಂತೆ ಅಧಿಕಾರವನ್ನು ಪ್ರತ್ಯಾಯೋಜಿಸಲು ಸರ್ಕಾರವು ತೀರ್ಮಾನಿಸಿರುತ್ತದೆ.

**ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳು:**

| | | |
|---|---|---|
| i) | ಆಯುಕ್ತರು,<br>ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು | ಬೆಂಗಳೂರು ವಲಯದ ಪ್ರಾಥಮಿಕ ಪ್ರೌಢ ಶಿಕ್ಷಣ ಸಂಸ್ಥೆಗಳು |
| ii) | ಅಪರ ಆಯುಕ್ತರು,<br>ಸಾರ್ವಜನಿಕ ಶಿಕ್ಷಣ ಇಲಾಖೆ | ವಾಯುವ್ಯ ವಲಯದ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಂಸ್ಥೆಗಳು |
| iii) | ಅಪರ ಆಯುಕ್ತರು,<br>ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ. | ಈಶಾನ್ಯ ವಲಯದ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಂಸ್ಥೆಗಳು |
| iv) | ಆಯುಕ್ತರು,<br>ಪದವಿ ಪೂರ್ವ ಶಿಕ್ಷಣ ಇಲಾಖೆ | ಪದವಿ ಪೂರ್ವ ಶಿಕ್ಷಣ ಕಾಲೇಜುಗಳು |

ಅದರಂತೆ ಆಯಾ ಆಯುಕ್ತರ ಕಛೇರಿಯಲ್ಲಿ ಸಂಬಂಧಿಸಿದ ಆಯುಕ್ತರು ಅಧ್ಯಕ್ಷರಾಗಿ, ಸಂಬಂಧಿಸಿದ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಸಂಬಂಧಿಸಿದ ಜಂಟಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ಸದಸ್ಯ ಕಾರ್ಯದರ್ಶಿ ಎಂದು ಈ ಕೆಳಕಂಡಂತೆ ಪರಿಶೀಲನಾ ಸಮಿತಿಯನ್ನು ರಚಿಸಲು ಈ ಮೂಲಕ ಆದೇಶಿಸಲಾಗಿದೆ.

**ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು**

ಆಯುಕ್ತರು – ಅಧ್ಯಕ್ಷರು

ನಿರ್ದೇಶಕರು (ಪ್ರಾಥಮಿಕ) – ಸದಸ್ಯರು

ನಿರ್ದೇಶಕರು, ಉರ್ದು ಮತ್ತು ಇತರೆ ಭಾಷಾ ಅಲ್ಪಸಂಖ್ಯಾತ ಶಾಲೆಗಳು – ಸದಸ್ಯ ಕಾರ್ಯದರ್ಶಿ

**ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ**

ಅಪರ ಆಯುಕ್ತರು – ಅಧ್ಯಕ್ಷರು

ನಿರ್ದೇಶಕರು – ಸದಸ್ಯರು

ಜಂಟಿ ನಿರ್ದೇಶಕರು – ಸದಸ್ಯ ಕಾರ್ಯದರ್ಶಿ

**ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ**

ಅಪರ ಆಯುಕ್ತರು – ಅಧ್ಯಕ್ಷರು

ನಿರ್ದೇಶಕರು – ಸದಸ್ಯರು

ಜಂಟಿ ನಿರ್ದೇಶಕರು – ಸದಸ್ಯ ಕಾರ್ಯದರ್ಶಿ

ಭಾಷಾ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳೆಂದು ಘೋಷಿಸುವ ಸಂದರ್ಭದಲ್ಲಿ ರೋಸ್ಟರ್ ಪದ್ಧತಿ ಪಾಲಿಸುವ ಷರತ್ತನ್ನು ವಿಧಿಸುವುದು ಹಾಗೂ ದಿನಾಂಕ:20.07.2004ರ ಸರ್ಕಾರದ ಸುತ್ತೋಲೆ ಸಂಖ್ಯೆ: ಇಡಿ 5 ಎಸ್‌ಎಂಸಿ 2002 ಹಾಗೂ ದಿನಾಂಕ:12.12.2006ರ ತಿದ್ದೋಲೆ ಸಂಖ್ಯೆ: ಇಡಿ 22 ಎಂಪಿಎಸ್ 2006 ರಲ್ಲಿ ನಿಗದಿಪಡಿಸಿರುವ ಮಾರ್ಗಸೂಚಿಗಳನ್ವಯ ಪ್ರಸ್ತಾವನೆಗಳನ್ನು ಪರಿಶೀಲಿಸಿ ಭಾಷಾ ಅಲ್ಪ ಸಂಖ್ಯಾತರುಗಳು ನಡೆಸುತ್ತಿರುವ ಶಿಕ್ಷಣ ಸಂಸ್ಥೆಗಳನ್ನು ಭಾಷಾ ಅಲ್ಪ ಸಂಖ್ಯಾತ ಶಿಕ್ಷಣ ಸಂಸ್ಥೆಗಳೆಂದು ಘೋಷಿಸಲು ಕಂಡಿಕೆ–2 ರಲ್ಲಿ ಸೂಚಿಸಿರುವ ರೀತಿಯಲ್ಲಿ ಅಧಿಕಾರ ಪ್ರತ್ಯಾಯೋಜಿಸಿದೆ.

ಡಿ.ಎಡ್. ಕಾಲೇಜುಗಳಿಗೆ ಸಂಬಂಧಪಟ್ಟಂತೆ ಭಾಷಾ ಅಲ್ಪ ಸಂಖ್ಯಾತ ಶಿಕ್ಷಣ ಸಂಸ್ಥೆಗಳೆಂದು ಘೋಷಿಸುವ ಬಗ್ಗೆ ಸರ್ಕಾರದ ಹಂತದಲ್ಲಿಯೇ ಕ್ರಮ ತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಹೆಚ್. ಕುರಿಯವರ್**

ಪಿ.ಆರ್.891

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸಮಿತಿಗಳು).

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 118 ಸಿಎನ್‌ಎಸ್ 2010, ಬೆಂಗಳೂರು, ದಿನಾಂಕ:28ನೇ ಸೆಪ್ಟೆಂಬರ್, 2010**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ:11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಆನೇಕಲ್ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಆನೇಕಲ್, ಬೆಂಗಳೂರು ನಗರ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

1) ಶ್ರೀ ಮುರುಗೇಶ್ ಬಿನ್ ಚಿನ್ನಪ್ಪ, ಹೆಬ್ಬಗೋಡಿ, ಆನೇಕಲ್ ತಾಲ್ಲೂಕು.

2) ಶ್ರೀ ಸೋಮಶೇಖರ ರೆಡ್ಡಿ ವಿ.ಹೆಚ್. ಬಿನ್ ಹನುಮಂತ ರೆಡ್ಡಿ, ವಣಕನಹಳ್ಳಿ ಗ್ರಾಮ, ಆನೇಕಲ್

3) ಶ್ರೀಮತಿ ಸೌಭಾಗ್ಯಮ್ಮ ಗಂಡ ಎನ್. ಶಿವಕುಮಾರ್, ಥಳಿ ರಸ್ತೆ, ಆನೇಕಲ್ ಟೌನ್.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್.892

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 120 ಸಿಎಸ್‌ಎಸ್ 2010, ಬೆಂಗಳೂರು, ದಿನಾಂಕ:28ನೇ ಸೆಪ್ಟೆಂಬರ್, 2010**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ:11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಸೀತಾರಾಮ ಎ.ಪಿ. ಬಿನ್ ಅಟ್ಟಿ ಪುಟ್ಟಪ್ಪ ಹಂಸಗಾರ, ಸಾಗರ ತಾಲ್ಲೂಕು ಇವರನ್ನು ಸಾಗರ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಸಾಗರ, ಶಿವಮೊಗ್ಗ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್.893

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 121 ಸಿಎಸ್‌ಎಸ್ 2010, ಬೆಂಗಳೂರು, ದಿನಾಂಕ:28ನೇ ಸೆಪ್ಟೆಂಬರ್, 2010**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ:11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಗೌಡರ ಸಂಗಪ್ಪ ಬಿನ್ ಶಂಕರಪ್ಪ, ಎಲೆಬೇತೂರು ಗ್ರಾಮ, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ ಇವರನ್ನು ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ದಾವಣಗೆರೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್.894

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**FOREST, ENVIRONMENT AND ECOLOGY SECRETARIAT**

**NOTIFICATION**

**No.FEE 36 EPC 2010, Bangalore, Dated:12th October, 2010**

In continuation to Government Notification No.FEE 36 EPC 2010, Dated:14.09.2010 & in exercise of powers conferred under Section 28 of the Water (Prevention & Control of Pollution) Act, 1974 & Under Section 31 of the Air (Prevention & Control of Pollution) Act, 1981, Government hereby extends the term of office of Mr. Justice A.M. Farooq, Retired Judge of High Court of Karnataka, as Chairman, Karnataka State Appellate Authority, Bangalore by one month from 16.10.2010.

The terms & Conditions shall remain the same as per Government Order No.FEE 97 EPC 2006, Dated:23.07.2008.

By Order and in the name of the Governor of Karnataka,

**B. MANOHAR**

PR-895

Under Secretary to Government,
Forest, Environment and Ecology Department.

**PERSONNEL AND ADMINISTRATIVE REFORMS SECRETARIAT**

**CORRIGENDUM**

**No.DPAR 24 SDE 2010, Bangalore, Dated:6th October, 2010**

In Notification No.DPAR 7 SDE 2008, Dated:10.09.2009, amendments have been made to Schedule I, II and III of the Karnataka Civil Services (Classification, Control and Appeal) Rules, 1957 relating to the Department of Welfare of Disabled and Senior Citizens.

In the said Notification, under 2. Amendment of Schedule I, the figure '39' appeared in the third line be read as '40' and the figures and words '40' Department of Welfare of Disabled and Senior Citizen's as '41. Department of Welfare of Disabled and Senior Citizens'.

By Order and in the name of the Governor of Karnataka,

**P. MARKANDEYA**

Under Secretary to Government,

Department of Personnel and Administrative Reforms (Service Rules-2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ: ಸಿಆಸುಇ 24 ಸೇಇವಿ 2010, ಬೆಂಗಳೂರು, ದಿನಾಂಕ:6ನೇ ಅಕ್ಟೋಬರ್, 2010**

ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆಗೆ ಸಂಬಂಧಪಟ್ಟಂತೆ, ಕರ್ನಾಟಕ ನಾಗರಿಕ ಸೇವ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ಅನುಸೂಚಿ I, II ಮತ್ತು III ಕ್ಕೆ ದಿನಾಂಕ:10.09.2009ರ ಅಧಿಸೂಚನೆ ಸಂಖ್ಯೆ:ಸಿಆಸುಸಿ 7 ಸೇಇವಿ 2008ರಲ್ಲಿ ತಿದ್ದುಪಡಿ ಮಾಡಲಾಗಿದೆ.

ಸದರಿ ಅಧಿಸೂಚನೆಯ '2. ಅನುಸೂಚಿ 1ಕ್ಕೆ ತಿದ್ದುಪಡಿ' ಯ 3ನೇ ಸಾಲಿನಲ್ಲಿರುವ ಸಂಖ್ಯೆ '39' ನ್ನು '40' ಎಂದು ಮತ್ತು '40. ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ' ಯನ್ನು '41. ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ' ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಮಾರ್ಕಂಡೇಯ**

ಪಿ.ಆರ್.896 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವಾ ನಿಯಮಗಳು–2).

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 868 ವೆಚ್ಚ–12/10, ಬೆಂಗಳೂರು, ದಿನಾಂಕ:15ನೇ ಅಕ್ಟೋಬರ್, 2010**

ದಿನಾಂಕ:04.10.2010ರ ಸಚಿವ ಸಂಪುಟ ನಿರ್ಣಯದ ಅನುಸಾರ ಕರ್ನಾಟಕ ರಾಜ್ಯ ಕೈಮಗ್ಗ ಅಭಿವೃದ್ಧಿ ನಿಗಮದಿಂದ ರಾಜ್ಯದಲ್ಲಿಯೇ ಲಭ್ಯವಿರುವ ಉತ್ತಮ ಗುಣಮಟ್ಟದ ಸೀರೆಗಳನ್ನು ಪೂರ್ವ ನಿರ್ಧರಿತ ಮಿತಿಯಲ್ಲಿ ಖರೀದಿಸಲು ಹಾಗೂ ಬಾಕಿ ಸೀರೆಗಳನ್ನು ಮೆ: ರಚನಾ ಗ್ರೂಪ್ ಆಫ್ ಇಂಡಸ್ಟ್ರೀಸ್, ಗುಜರಾತ್ ಇವರಿಂದ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ನೀಡಲಾದ ಬೆಲೆಗೆ ತಕ್ಕನಾದ ಗುಣಮಟ್ಟದ ಉತ್ಪನ್ನವನ್ನು ಸಂಗ್ರಹಿಸುವುದನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ಕರ್ನಾಟಕ ರಾಜ್ಯ ಕೈಮಗ್ಗ ಅಭಿವೃದ್ಧಿ ನಿಗಮಗಳು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್.897 ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)